# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1190 |
| ಸದಸ್ಯರ ಹೆಸರು | ಶ್ರೀ ಕವಟಗಿ ಮಠ ಮಹಾಂತೇಶ ಮಲ್ಲಿಕಾರ್ಜುನ |
| ಉತ್ತರಿಸುವ ದಿನಾಂಕ | 22-09-2021 |
| ಉತ್ತರಿಸುವವರು | ಮಾನ್ಯ ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯ 'ಎ' ದರ್ಜೆ ದೇವಾಲಯಗಳಲ್ಲಿನ ಎಲ್ಲಾ ಸೇವೆಗಳನ್ನು ಬ್ಯಾಂಕ್ ಮೂಲಕ ನಿರ್ವಹಿಸುವ ಸರ್ಕಾರದ ಯೋಜನೆ ಯಾವ ಹಂತದಲ್ಲಿದೆ; | ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯ 'ಎ' ದರ್ಜೆ ದೇವಾಲಯಗಳಲ್ಲಿನ ಎಲ್ಲಾ ಸೇವೆಗಳನ್ನು ಬ್ಯಾಂಕ್ ಮೂಲಕ ನಿರ್ವಹಿಸುವ ಕುರಿತಂತೆ ಹೆಚ್‌ಡಿಎಫ್‌ಸಿ ಬ್ಯಾಂಕ್ ನವರೊಂದಿಗೆ ಎಂಒಯು ಮಾಡಿಕೊಳ್ಳುವ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ರಾಜ್ಯದ ಯಾವ ಯಾವ ದೇವಾಲಯಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ; | ಸರ್ಕಾರದ ಪತ್ರ ಸಂಖ್ಯೆ: ಕಂಇ/2/ಮುಅಬಿ/2021 ದಿನಾಂಕ:26-05-2021ರನ್ವಯ ಮೊದಲ ಹಂತದಲ್ಲಿ ರಾಜ್ಯದ ಕೆಳಕಂಡ 3 ದೇವಾಲಯಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>1. ಶ್ರೀ ಬನಶಂಕರಿ ದೇವಾಲಯ, ಎಸ್.ಕರಿಯಪ್ಪ ರಸ್ತೆ ಬೆಂಗಳೂರು ನಗರ<br>2. ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಾಲಯ, ಕಡಬ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.<br>3. ಶ್ರೀ ಶ್ರೀಕಂಠೇಶ್ವರ ಸ್ವಾಮಿ ದೇವಾಲಯ ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. |
| ಇ) | ದೇವಾಲಯಗಳ ಜೊತೆಯಲ್ಲಿ ಅನ್ಯ ಧರ್ಮೀಯ ಧಾರ್ಮಿಕ ಕೇಂದ್ರಗಳಲ್ಲೂ ಈ ಯೋಜನೆಯನ್ನು ಜಾರಿಗೊಳಿಸಲಾಗಿದೆಯೇ? | ದೇವಾಲಯಗಳ ಜೊತೆಯಲ್ಲಿ ಅನ್ಯ ಧರ್ಮೀಯ ಧಾರ್ಮಿಕ ಕೇಂದ್ರಗಳಲ್ಲೂ ಈ ಯೋಜನೆಯನ್ನು ಜಾರಿಗೊಳಿಸಿರುವ ಕುರಿತು ಧಾರ್ಮಿಕ ದತ್ತಿ ಇಲಾಖೆಯಲ್ಲಿ ಮಾಹಿತಿ ಇರುವುದಿಲ್ಲ. |
| ಈ) | ಈ ಯೋಜನೆ ಅನುಷ್ಠಾನಗೊಂಡ ಬೆಳಗಾವಿ ಜಿಲ್ಲೆಯ ದೇವಾಲಯಗಳ/ ಧಾರ್ಮಿಕ ಕೇಂದ್ರಗಳ ಕುರಿತು ಮಾಹಿತಿ ನೀಡುವುದು; | ಬೆಳಗಾವಿ ಜಿಲ್ಲೆಯ ದೇವಸ್ಥಾನಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ. |

ಸಂಖ್ಯೆ: ಕಂಇ 199 ಮುಸಪ್ರ 2021

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು